

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ವಿಧಾನ ಪರಿಷತ್ತ ಸದಸ್ಯರ ಹೆಸರು: | ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: | 172 (978) |
| ಉತ್ತರಿಸಬೇಕಾದ ದಿನಾಂಕ: | 15-03-2021 |
| ಉತ್ತರಿಸುವ ಸಚಿವರು: | ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ವೈದ್ಯಕೀಯ ಕಾಲೇಜುಗಳು ಸೀಟ್ ಬ್ಲಾಕಿಂಗ್ ದಂಧೆ ನಡೆಸುತ್ತಿರುವ ಬಗ್ಗೆ ಸರಕಾರದ ನಿಲುವೇನು; | ವೈದ್ಯಕೀಯ ಕಾಲೇಜುಗಳ ಪ್ರವೇಶಾತಿಯಲ್ಲಿ ಸೀಟ್ ಬ್ಲಾಕಿಂಗ್ ನಡೆಸುತ್ತಿರುವ ಬಗ್ಗೆ ಸರ್ಕಾರವು ಗಂಭೀರವಾಗಿ ಪರಿಗಣಿಸಿದೆ. ಈ ಹಿನ್ನೆಲೆಯಲ್ಲಿ ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ಆಗಬಹುದಾದ ಸೀಟ್ ಬ್ಲಾಕಿಂಗ್ ನಿಯಂತ್ರಿಸಲು Karnataka Professional Educational Institutions (Regulation of Admission and Determination of Fee) Act, 2006 ಮತ್ತು ನಿಯಮಗಳು ಹಾಗೂ ಖಾಸಗಿ ವೈದ್ಯಕೀಯ ಕಾಲೇಜುಗಳ ಸಂಘಗಳೊಂದಿಗೆ ಸರ್ಕಾರವು ಸ್ನಾತಕ ಹಾಗೂ ಸ್ನಾತಕೋತ್ತರ ಸೀಟುಗಳಿಗಾಗಿ ಮಾಡಿಕೊಂಡ ಒಡಂಬಡಿಕೆಯನ್ನು (Consensual agreement) ಪರಿಶೀಲಿಸಿ, ಸದರಿ ಕಾಯಿದೆ ಮತ್ತು ನಿಯಮಾವಳಿಗಳಿಗೆ ತಿದ್ದುಪಡಿ ತರುವ ಬಗ್ಗೆ ಸಲಹೆ/ವರದಿ ನೀಡಲು ಡಾ.ಸಚ್ಚಿದಾನಂದ ಎಸ್. ಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ 05 ಜನ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ. ಸದರಿ ಸಮಿತಿಯು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತದೆ. ಈ ವರದಿಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |
| ಆ) | ಕಳೆದ ಎರಡು ವರ್ಷಗಳಲ್ಲಿ ಎಷ್ಟು ವೈದ್ಯಕೀಯ ಕಾಲೇಜುಗಳಿಗೆ ಸೀಟ್ ಬ್ಲಾಕಿಂಗ್ ಕುರಿತು ವಿಶ್ವವಿದ್ಯಾಲಯದಿಂದ ನೋಟಿಸ್ ನೀಡಲಾಗಿದೆ; ಸೀಟ್ ಬ್ಲಾಕಿಂಗ್ ದಂಧೆ ನಡೆಸುತ್ತಿರುವ ವೈದ್ಯಕೀಯ | ಕಳೆದ ಎರಡು ವರ್ಷಗಳಲ್ಲಿ ಸೀಟ್ ಬ್ಲಾಕಿಂಗ್ ಕುರಿತು ಯಾವುದೇ ವೈದ್ಯಕೀಯ ಕಾಲೇಜುಗಳಿಗೆ ವಿಶ್ವವಿದ್ಯಾಲಯದಿಂದ ನೋಟೀಸ್‌ನ್ನು ನೀಡಲಾಗಿರುವುದಿಲ್ಲ. ಅಫಿಲಿಯೇಷನ್ ರದ್ದುಗೊಳಿಸುವ ಯಾವುದೇ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ. |

| | | |
|---|---|---|
| | ಕಾಲೇಜುಗಳ ಅಫಿಲಿಯೇಷನ್ ರದ್ದುಗೊಳಿಸಲು ಸರಕಾರ ಯಾವ ಕ್ರಮ ಕೈಗೊಂಡಿದೆ; | |
| ಇ) | ಮಂಗಳೂರಿನ ಕೆಲವು ವೈದ್ಯಕೀಯ ಕಾಲೇಜುಗಳು ಸೀಟ್ ಬ್ಲಾಕಿಂಗ್ ದಂಧೆ ನಡೆಸುತ್ತಿರುವ ಬಗ್ಗೆ ಪತ್ರಿಕೆಯಲ್ಲಿ ವರದಿಯಾಗಿದ್ದು, ಇದರಿಂದ 400 ಕೋಟಿಗೂ ಹೆಚ್ಚಿನ ಮೊತ್ತ ಪತ್ತೆ ಹಚ್ಚಲಾದ ಕುರಿತು ಸರಕಾರದ ನಿಲುವೇನು; ಸೀಟ್ ಬ್ಲಾಕಿಂಗ್ ದಂಧೆಯ ಕುರಿತು ಪೊಲೀಸ್ ಠಾಣೆಯಲ್ಲಿ ದೂರು ನೀಡಲಾಗಿದೆಯೇ; ಇಲ್ಲದಿದ್ದಲ್ಲಿ ದೂರು ದಾಖಲು ಮಾಡುವುದು ಯಾವಾಗ; | ಮಂಗಳೂರಿನ ವೈದ್ಯಕೀಯ ಕಾಲೇಜುಗಳಲ್ಲಿ ಸೀಟ್ ಬ್ಲಾಕಿಂಗ್ ನಡೆಸುತ್ತಿರುವ ಬಗ್ಗೆ ಪತ್ರಿಕಾ ವರದಿಗಳಿಂದ ತಿಳಿದು ಬಂದಿರುತ್ತದೆ. ಇದಕ್ಕೆ ಸಂಬಂದಿಸಿದಂತೆ ಭಾರತ ಸರ್ಕಾರದ ಸಂಬಂದಪಟ್ಟ ಇಲಾಖೆಗಳು ಸೂಕ್ತ ಕ್ರಮ ಕೈಗೊಳ್ಳುತ್ತಿದೆ ಎಂದು ತಿಳಿದು ಬಂದಿರುತ್ತದೆ.<br>ವೈದ್ಯಕೀಯ ಶಿಕ್ಷಣ ಇಲಾಖೆಯ ವತಿಯಿಂದ ಸೀಟ್ ಬ್ಲಾಕಿಂಗ್ ಕುರಿತು ಪೊಲೀಸ್ ಠಾಣೆಯಲ್ಲಿ ಯಾವುದೇ ದೂರನ್ನು ನೀಡಲಾಗಿರುವುದಿಲ್ಲ. ಆದಾಗ್ಯೂ ಸೀಟ್ ಬ್ಲಾಕಿಂಗ್ ನಿಯಂತ್ರಿಸಲು ಕಾಯ್ದೆಯಲ್ಲಿ ತಿದ್ದುಪಡಿ ತರುವುದರ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |
| ಈ | ಸೀಟ್ ಬ್ಲಾಕಿಂಗ್ ದಂಧೆಯ ಹಣದಲ್ಲಿ ವಿಶ್ವವಿದ್ಯಾಲಯದ ಅಧಿಕಾರಿಗಳಿಗೂ ಪಾಲು ಇರುವುದಾಗಿ ಮಾಹಿತಿ ಇದ್ದು, ಈ ಕುರಿತು ಸರಕಾರದ ನಿಲುವೇನು; ವೈದ್ಯಕೀಯ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ಈ ಕುರಿತು ನೋಟಿಸ್ ನೀಡಲಾಗಿದೆಯೇ | ಸರ್ಕಾರಕ್ಕೆ ಭ್ರಷ್ಟಾಚಾರ ನಿಗ್ರಹ ದಳವು ಸೀಟ್ ಬ್ಲಾಕಿಂಗ್ ಕುರಿತು ಅಧಿಕಾರಿಗಳ ಮೇಲೆ ತನಿಖೆ ನಡೆಸಲು ಪೂರ್ವಾನುಮತಿಯನ್ನು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ.<br>ಸೀಟ್ ಬ್ಲಾಕಿಂಗ್ ಬಗ್ಗೆ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ಯಾವುದೇ ನೋಟೀಸ್‌ನ್ನು ನೀಡಲಾಗಿರುವುದಿಲ್ಲ. |

No:-MED 40 RGU 2021

(ಡಾ.ಕೆ.ಸುಧಾಕರ್)
ವೈದ್ಯಕೀಯ ಶಿಕ್ಷಣ ಹಾಗೂ
ಆರೋಗ್ಯ ಮತ್ತು ಕುಟುಂಬ
ಕಲ್ಯಾಣ ಇಲಾಖಾ ಸಚಿವರು